# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 176 |
| ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 03.03.2020 |
| ಉತ್ತರಿಸುವ ಸಚಿವರು | : | ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದ ನ್ಯಾಯಬೆಲೆ ಅಂಗಡಿಗಳಿಗೆ ಬಿ.ಪಿ.ಎಲ್/ಎ.ಪಿ.ಎಲ್ ಹಾಗೂ ಅಂತ್ಯೋದಯ ಕಾರ್ಡುದಾರರಿಗೆ ವಿತರಿಸುವ ಪಡಿತರ ಅಕ್ಕಿ ಹಾಗೂ ಇತರೆ ದಿನಸಿ ಪದಾರ್ಥಗಳು ಸಂಪೂರ್ಣವಾಗಿ ಫಲಾನುಭವಿಗಳಿಗೆ ತಲುಪದೆ ಅಕ್ರಮ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಬಂದಿದ್ದಲ್ಲಿ, ಅಕ್ರಮ ತಡೆಗಟ್ಟುವ ನಿಟ್ಟಿನಲ್ಲಿ ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ ಹಾಗೂ ಕಳೆದ ಎರಡು ವರ್ಷಗಳ ಅವಧಿಯಲ್ಲಿ ಸಂಭವಿಸಿದ ದುರುಪಯೋಗದ ಪ್ರಕರಣಗಳೆಷ್ಟು; | ರಾಜ್ಯದ ಸಾರ್ವಜನಿಕ ವಿತರಣಾ ಪದ್ಧತಿಯಡಿ ವಿತರಿಸುತ್ತಿರುವ ಪಡಿತರ ಪದಾರ್ಥಗಳು ಸಂಪೂರ್ಣವಾಗಿ ಫಲಾನುಭವಿಗಳಿಗೆ ತಲುಪಿಸಲು ಈ ಕೆಳಕಂಡ ಸುಧಾರಣೆಗಳನ್ನು ಜಾರಿಗೆ ತರಲಾಗಿದೆ.<br>1. ರಾಜ್ಯದ ಎಲ್ಲಾ ಪಡಿತರ ಚೀಟಿಗಳನ್ನು ಫಲಾನುಭವಿಗಳ ಆಧಾರ್ ನೊಂದಿಗೆ ಜೋಡಣೆ ಮಾಡಲಾಗಿದೆ. ಪ್ರತಿ ತಿಂಗಳು ಬಯೋಮೆಟ್ರಿಕ್ ವ್ಯವಸ್ಥೆಯ ಮುಖಾಂತರ ಫಲಾನುಭವಿಗಳಿಗೆ ಆಹಾರ ಧಾನ್ಯವನ್ನು ವಿತರಿಸಲಾಗುತ್ತಿದೆ.<br>2. ನ್ಯಾಯಬೆಲೆ ಅಂಗಡಿಗಳ ಬಿಲ್ಲಿಂಗ್ ವ್ಯವಸ್ಥೆಯನ್ನು ಗಣಕೀಕರಣಗೊಳಿಸಿ ಆನ್ ಲೈನ್ ವ್ಯವಸ್ಥೆಯನ್ನು ಜಾರಿ ಮಾಡಲಾಗಿದೆ.<br>3. ಪಡಿತರ ಫಲಾನುಭವಿಗಳ ಕುಂದುಕೊರತೆಗಳ ನಿವಾರಣೆಗೆ ಸಂಬಂಧಿಸಿದಂತೆ ಆಹಾರ ಅದಾಲತ್, ಜಾಗೃತ ಸಮಿತಿಗಳು, ಸಹಾಯವಾಣಿ, ಹಂಚಿಕೆ ಬಗ್ಗೆ ಪಡಿತರ ಚೀಟಿದಾರರಿಗೆ ಎಸ್.ಎಂ.ಎಸ್ ರವಾನೆ ಇತ್ಯಾದಿ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>ರಾಜ್ಯದಲ್ಲಿ ಕಳೆದ ಎರಡು ವರ್ಷಗಳಲ್ಲಿ ಪಡಿತರ ದುರುಪಯೋಗ ಪ್ರಕರಣಗಳಿಗೆ ಸಂಬಂಧಿಸಿದಂತೆ ಒಟ್ಟು 209 ಪ್ರಕರಣಗಳನ್ನು ದಾಖಲಿಸಲಾಗಿದೆ. 41 ನ್ಯಾಯಬೆಲೆ ಅಂಗಡಿಗಳನ್ನು ರದ್ದುಪಡಿಸಲಾಗಿದ್ದು, 168 ನ್ಯಾಯಬೆಲೆ ಅಂಗಡಿಗಳನ್ನು ಅಮಾನತ್ತು ಪಡಿಸಿ ವಿಚಾರಣೆ ಜಾರಿಯಲ್ಲಿರುತ್ತದೆ. |

| | | |
|---|---|---|
| | | ಇದಲ್ಲದೇ ಅಗತ್ಯ ವಸ್ತುಗಳ ಕಾಯ್ದೆಯಡಿ ರಾಜ್ಯದಲ್ಲಿ 191 ಪ್ರಕಣಗಳನ್ನು ದಾಖಲಿಸಿದ್ದು, 2602.97 ಕ್ವಿಂಟಾಲ್. ಅಕ್ಕಿ ಮತ್ತು 37.71ಕ್ವಿಂಟಾಲ್. ಗೋಧಿಯನ್ನು ವಶಪಡಿಸಿಕೊಳ್ಳಲಾಗಿದೆ. |
| ಇ | ಅಕ್ರಮಗಳಲ್ಲಿ ಭಾಗಿಯಾದ ಅಧಿಕಾರಿ ಹಾಗೂ ಸಿಬ್ಬಂದಿಗಳ ವಿರುದ್ಧ ಸರ್ಕಾರ ಯಾವ ಶಿಸ್ತಿನ ಕ್ರಮ ಕೈಗೊಂಡಿದೆ: | ಇಲ್ಲ. |
| ಈ | ಪ್ರತೀ ಕಾರ್ಡುದಾರರಿಗೆ ವಿವಿಧ ಯೋಜನೆಯಡಿಯಲ್ಲಿ ವಿತರಿಸುತ್ತಿರುವ ಧಾನ್ಯಗಳ ಪ್ರಮಾಣ ಹಾಗೂ ಒಟ್ಟು ಫಲಾನುಭವಿಗಳ ಸಂಖ್ಯೆ ಎಷ್ಟು: (ಜಿಲ್ಲಾವಾರು ವಿವರ ನೀಡುವುದು)? | ಅಂತ್ಯೋದಯ ಪಡಿತರ ಚೀಟಿಯನ್ನು ಹೊಂದಿರುವ ಕುಟುಂಬಕ್ಕೆ ಪ್ರತಿ ಕುಟುಂಬಕ್ಕೆ ಪ್ರತಿ ತಿಂಗಳು 35 ಕೆ.ಜಿ ಅಕ್ಕಿಯನ್ನು, ಆದ್ಯತಾ (ಬಿಪಿಎಲ್ ) ಪಡಿತರ ಚೀಟಿಯನ್ನು ಹೊಂದಿರುವ ಕುಟುಂಬದ ಪ್ರತಿ ಸದಸ್ಯರಿಗೆ ಪ್ರತಿ ತಿಂಗಳು 7 ಕೆ.ಜಿ ಅಕ್ಕಿಯನ್ನು ಉಚಿತವಾಗಿ ನೀಡಲಾಗುತ್ತಿದೆ. ಆದ್ಯತೇತರ (ಎಪಿಎಲ್) ಪಡಿತರ ಚೀಟಿಯನ್ನು ಹೊಂದಿರುವ ಒಂದು ಸದಸ್ಯ ಕಾರ್ಡ್ ಗೆ 5 ಕೆ.ಜಿ ಮತ್ತು ಒಂದಕ್ಕಿಂತ ಹೆಚ್ಚು ಸದಸ್ಯರಿರುವ ಪಡಿತರ ಚೀಟಿಗೆ 10 ಕೆ.ಜಿ ಅಕ್ಕಿಯನ್ನು ಪ್ರತಿ ಕೆ.ಜಿ ಗೆ ರೂ.15/- ರಂತೆ ವಿತರಿಸಲಾಗುತ್ತಿದೆ. ರಾಜ್ಯದಲ್ಲಿ ಈ ಕೆಳಕಂಡಂತೆ ಒಟ್ಟು 1,27,01,947 ಬಿಪಿಎಲ್ (ಅಂತ್ಯೋದಯ+ ಆದ್ಯತಾ ಕುಟುಂಬ) . ಪಡಿತರ ಚೀಟಿಗಳಿದ್ದು, ಇವರಲ್ಲಿ 4,30,22,545 ಸದಸ್ಯರಿರುತ್ತಾರೆ. |

| ಪಡಿತರ ಚೀಟಿಗಳು | ಸದಸ್ಯರ ವಿವರ |
|---|---|
| ಅಂತ್ಯೋದಯ (ಎಎವೈ) | 46,57,622 |
| ಆದ್ಯತಾ (ಬಿಪಿಎಲ್) | 3,83,64,923 |
| ಆದ್ಯತೇತರ (ಎಪಿಎಲ್) | 72,64,922 |
| ಒಟ್ಟು | 5,02,87,467 |

ಆನಾಸ 39 ಡಿಆರ್ ಎ 2020 (ಇ-ಆಫೀಸ್)

(ಕೆ.ಗೋಪಾಲಯ್ಯ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.